# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | | 12(102) |
| ಸದಸ್ಯರ ಹೆಸರು | | ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ |
| ಉತ್ತರಿಸಬೇಕಾದ ದಿನಾಂಕ | | 21.09.2020 |
| ಉತ್ತರಿಸಬೇಕಾದ ಸಚಿವರು | | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಪ್ರಶ್ನೆ | | ಉತ್ತರ |
| ಅ | ಉನ್ನತ ಶಿಕ್ಷಣ ಇಲಾಖೆಯ ಆಯುಕ್ತಾಲಯದ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರ ಸಂಖ್ಯೆ ಎಷ್ಟು? ಇವರುಗಳು ಯಾವ ವರ್ಷದಿಂದ ಕರ್ತವ್ಯ ನಿರ್ವಹಿಸುತ್ತಿದ್ದಾರೆ (ಜಿಲ್ಲಾವಾರು ಮಾಹಿತಿ ನೀಡುವುದು) | ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಪ್ರತಿ ಶೈಕ್ಷಣಿಕ ವರ್ಷದಲ್ಲಿ ಕೋರ್ಸ್/ಕಾಂಬಿನೇಷನ್ ಮತ್ತು ವಿದ್ಯಾರ್ಥಿಗಳ ಪ್ರವೇಶಾತಿ ಸಂಖ್ಯೆಗನುಗುಣವಾಗಿ ಉದ್ಭವಿಸುವ ಬೋಧನಾ ಕಾರ್ಯಭಾರವನ್ನು ಮೊದಲು ಖಾಯಂ ಅಧ್ಯಾಪಕರಿಗೆ ಹಂಚಿಕೆ ಮಾಡಿ, ನಂತರ ಉಳಿಕೆಯಾಗುವ ಹೆಚ್ಚುವರಿ ಬೋಧನಾ ಕಾರ್ಯಭಾರವನ್ನು ನಿರ್ವಹಿಸಲು ಆಯಾ ಶೈಕ್ಷಣಿಕ ವರ್ಷಕ್ಕೆ (10 ತಿಂಗಳಿಗೆ ಮಾತ್ರ) ಮಾತ್ರ ಸೀಮಿತಗೊಳಿಸಿ, ತಾತ್ಕಾಲಿಕವಾಗಿ ಅತಿಥಿ ಉಪನ್ಯಾಸಕರುಗಳ ಸೇವೆಯನ್ನು 2003-04ನೇ ಸಾಲಿನಿಂದಲೂ ಬಳಸಿಕೊಳ್ಳಲಾಗುತ್ತಿದ್ದು, ಆಯಾ ಶೈಕ್ಷಣಿಕ ವರ್ಷದ ಅಂತ್ಯದಲ್ಲಿ ಅತಿಥಿ ಉಪನ್ಯಾಸಕರುಗಳನ್ನು ಕರ್ತವ್ಯದಿಂದ ಬಿಡುಗಡೆಗೊಳಿಸಲಾಗುತ್ತದೆ.<br><br>ಅದರಂತೆ, ಪ್ರಸ್ತುತ ಕೋವಿಡ್-19 ಹಿನ್ನೆಲೆಯಲ್ಲಿ ಕಾಲೇಜುಗಳಲ್ಲಿ ತರಗತಿಗಳು ಇನ್ನು ಪ್ರಾರಂಭವಾಗದೇ ಇರುವುದರಿಂದ 2020-21ನೇ ಸಾಲಿನಲ್ಲಿ ಅತಿಥಿ ಉಪನ್ಯಾಸಕರನ್ನು ಆಯ್ಕೆ ಮಾಡಿಕೊಂಡಿರುವುದಿಲ್ಲ. ಆದರೆ ಕಳೆದ 2019-20ನೇ ಸಾಲಿನಲ್ಲಿ ಕರ್ತವ್ಯ ನಿರ್ವಹಿಸಿದ್ದ ಅತಿಥಿ ಉಪನ್ಯಾಸಕರ ಸಂಖ್ಯೆ: 14447. ಇವರುಗಳು ಜೂನ್-ಜುಲೈ-2019 ರಿಂದ ಮಾರ್ಚ್-2020 ರವರೆಗೆ ಮಾತ್ರ ಕರ್ತವ್ಯ ನಿರ್ವಹಿಸಿದ್ದು, ನಂತರ ಕರ್ತವ್ಯದಿಂದ ಬಿಡುಗಡೆಗೊಳಿಸಲಾಗಿರುತ್ತದೆ. (ಜಿಲ್ಲಾವಾರು ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ.) |

| | | |
|---|---|---|
| ಆ) | ಸದರಿಯವರಿಗೆ ಹಾಲಿ ನೀಡುತ್ತಿರುವ ಗೌರವಧನ ಎಷ್ಟು; ಈ ಗೌರವ ಧನವನ್ನು ಹೆಚ್ಚಿಸಲು ಸರ್ಕಾರ ಚಿಂತನೆ ನಡೆಸಿದೆಯೇ; (ವಿವರವಾದ ಮಾಹಿತಿ ನೀಡುವುದು) | ದಿನಾಂಕ:04.04.2017ರ ಸರ್ಕಾರದ ಆದೇಶ ಸಂಖ್ಯೆ:ಇಡಿ/66/ಡಿಸಿಇ/2017ರನ್ವಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅತಿಥಿ ಉಪನ್ಯಾಸಕರಲ್ಲಿ ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ಕನಿಷ್ಠ ಶೇ.55ರಷ್ಟು ಅಂಕಗಳನ್ನು ಪಡೆದು ಎನ್‌ಇಟಿ/ಎಸ್‌ಎಲ್‌ಇಟಿ ಅಥವಾ ಪಿ.ಹೆಚ್‌ಡಿ ಹೊಂದಿರುವ ಅತಿಥಿ ಉಪನ್ಯಾಸಕರಿಗೆ ನೀಡುತ್ತಿರುವ ಮಾಸಿಕ ಗೌರವಧನದ ಮೊತ್ತವನ್ನು ಮಾರ್ಚ್-2017 ರಿಂದ ಜಾರಿಗೆ ಬರುವಂತೆ ರೂ.11,500/- ರಿಂದ ರೂ.13,000/-(ಹದಿಮೂರು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಹಾಗೂ ಸ್ನಾತಕೋತ್ತರ ಪದವಿ ಪಡೆದಿರುವ ಅತಿಥಿ ಉಪನ್ಯಾಸಕರ ಮಾಸಿಕ ಗೌರವಧನದ ಮೊತ್ತವನ್ನು ರೂ.9,500/- ರಿಂದ ರೂ.11,000/-(ಹನ್ನೊಂದು ಸಾವಿರ ರೂಪಾಯಿಗಳು ಮಾತ್ರ)ಗಳಿಗೆ ಹೆಚ್ಚಿಸಲಾಗಿದೆ.<br><br>ಸರ್ಕಾರದ ಪತ್ರ ಸಂಖ್ಯೆ:ಇಡಿ/07/ಡಿಸಿಇ/2019, ದಿನಾಂಕ:09.06.2020ರಲ್ಲಿ ಪ್ರಸ್ತುತ ರಾಜ್ಯದಲ್ಲಿ ತಲೆದೂರಿರುವ ಕೋವಿಡ್-19 ಹಿನ್ನೆಲೆಯಲ್ಲಿ ಉಂಟಾಗಿರುವ ಆರ್ಥಿಕ ಮುಗಟ್ಟಿನ ಹಾಗೂ ಈ ಸಂಬಂಧ ಇರುವ ಆರ್ಥಿಕ ನಿರ್ಬಂಧನೆಯ ಹಿನ್ನೆಲೆಯಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅತಿಥಿ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿರುವವರಿಗೆ ಗೌರವ ಧನ ಹೆಚ್ಚಿಸಲು ಸಾಧ್ಯವಿರುವುದಿಲ್ಲವೆಂದು ಆರ್ಥಿಕ ಇಲಾಖೆಯು ತಿಳಿಸಿರುತ್ತದೆ. |
| ಇ) | ಅತಿಥಿ ಉಪನ್ಯಾಸಕರಿಗೆ ಸೇವಾ ಭದ್ರತೆ ಒದಗಿಸಲು ಸರ್ಕಾರವು ಇಲ್ಲಿಯವರೆಗೆ ಯಾವ ಕ್ರಮ ಕೈಗೊಂಡಿದೆ? (ವಿವರವಾದ ಮಾಹಿತಿ ನೀಡುವುದು) | ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಪ್ರತಿ ಶೈಕ್ಷಣಿಕ ವರ್ಷದಲ್ಲಿ ವಿದ್ಯಾರ್ಥಿಗಳ ಸಂಖ್ಯೆಗನುಣವಾಗಿ ಉಂಟಾಗುವ ಕಾರ್ಯಭಾರವನ್ನು ಮೊದಲು ಖಾಯಂ ಅಧ್ಯಾಪಕರಿಗೆ ಹಂಚಿಕೆ ಮಾಡಿ, ನಂತರ ಉಳಿಕೆಯಾಗುವ ಹೆಚ್ಚುವರಿ ಕಾರ್ಯಭಾರವನ್ನು ನಿರ್ವಹಿಸಲು ಮಾತ್ರ ತಾತ್ಕಾಲಿಕವಾಗಿ ಅತಿಥಿ ಉಪನ್ಯಾಸಕರುಗಳ ಸೇವೆಯನ್ನು ಬಳಸಿಕೊಳ್ಳಲಾಗುತ್ತಿದೆ.<br><br>ಅತಿಥಿ ಉಪನ್ಯಾಸಕರುಗಳು ಇಲಾಖೆಯಲ್ಲಿ ಯಾವುದೇ ಮಂಜೂರಾದ ಖಾಲಿ ಹುದ್ದೆಗಳ ಎದುರಾಗಿ ಕರ್ತವ್ಯ ನಿರ್ವಹಿಸುತ್ತಿರುವುದಿಲ್ಲ. ಬದಲಾಗಿ ಆಯಾ ಶೈಕ್ಷಣಿಕ ವರ್ಷದಲ್ಲಿ ಹೆಚ್ಚುವರಿ ಕಾರ್ಯಭಾರಕ್ಕೆ ಮಾತ್ರ ಸೀಮಿತಗೊಳಿಸಿ, ತಾತ್ಕಾಲಿಕವಾಗಿ, ಅತಿಥಿ ಉಪನ್ಯಾಸಕರುಗಳನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ. ಆದ್ದರಿಂದ ಅವರುಗಳ ತಾತ್ಕಾಲಿಕ ಸೇವೆಯನ್ನು ಪರಿಗಣಿಸಿ ಸೇವಾ ಭದ್ರತೆಯನ್ನು ಒದಗಿಸಿ, ಖಾಯಂ ಮಾಡಲು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅವಕಾಶ ಇರುವುದಿಲ್ಲ. |

| | | |
|---|---|---|
| ಈ) | ಯುಜಿಸಿ ನಿಯಮಗಳಿಗೆ ಹೊಂದಿಕೊಂಡಂತೆ ವಿಶೇಷ ನಿಯಮಗಳನ್ನು ರಚಿಸಿ, ಅತಿಥಿ ಉಪನ್ಯಾಸಕರಿಗೆ ಸೇವಾ ಭದ್ರತೆಯನ್ನು ನೀಡಲು ಸರ್ಕಾರಕ್ಕೆ ಇರುವ ತೊಂದರೆಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಅತಿಥಿ ಉಪನ್ಯಾಸಕರುಗಳು ಇಲಾಖೆಯಲ್ಲಿ ಯಾವುದೇ ಮಂಜೂರಾದ ಖಾಲಿ ಹುದ್ದೆಗಳ ಎದುರಾಗಿ ಕರ್ತವ್ಯ ನಿರ್ವಹಿಸುತ್ತಿರುವುದಿಲ್ಲ. ಬದಲಾಗಿ ಆಯಾ ಶೈಕ್ಷಣಿಕ ವರ್ಷದಲ್ಲಿ ಹೆಚ್ಚುವರಿ ಕಾರ್ಯಭಾರಕ್ಕೆ ಮಾತ್ರ ಸೀಮಿತಗೊಳಿಸಿ, ತಾತ್ಕಾಲಿಕವಾಗಿ, ಅತಿಥಿ ಉಪನ್ಯಾಸಕರುಗಳನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ. ಆದ್ದರಿಂದ ಅವರುಗಳ ತಾತ್ಕಾಲಿಕ ಸೇವೆಯನ್ನು ಪರಿಗಣಿಸಿ ಸೇವಾ ಭದ್ರತೆಯನ್ನು ಒದಗಿಸಿ, ಖಾಯಂ ಮಾಡಲು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅವಕಾಶ ಇರುವುದಿಲ್ಲ.<br><br>ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದ ಶ್ರೀ ವೀರಣ್ಣ ಎಸ್. ಸಜ್ಜನರ್ ಹಾಗೂ ಇತರೆ 15 ಅತಿಥಿ ಉಪನ್ಯಾಸಕರುಗಳು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ:4625-4640/2012 ನ್ನು ದಾಖಲಿಸಿ, ತಮ್ಮ ಸೇವೆಯನ್ನು ಸಕ್ರಮಾತಿಗೊಳಿಸುವಂತೆ ಹಾಗೂ ಸರ್ಕಾರಿ ಕಾಲೇಜುಗಳಲ್ಲಿ ಖಾಲಿ ಇರುವ ಉಪನ್ಯಾಸಕರ ಹುದ್ದೆಯಲ್ಲಿ ತಮ್ಮನ್ನು ನೇಮಕ ಮಾಡುವಂತೆ ಸರ್ಕಾರ ಹಾಗೂ ಇಲಾಖೆಗೆ ನಿರ್ದೇಶನ ನೀಡುವಂತೆ ಕೋರಿದ್ದರು. ಸದರಿ ಅರ್ಜಿಯನ್ನು ಪರಿಶೀಲಿಸಿದ ಮಾನ್ಯ ನ್ಯಾಯಮಂಡಳಿಯು ಮಾನ್ಯ ಸರ್ವೋಚ್ಛ ನ್ಯಾಯಾಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ ತಾತ್ಕಾಲಿಕ ನೌಕರರನ್ನು ಅವರ ಸೇವಾವಧಿಯನ್ನು ಆಧರಿಸಿ ಸೇವಾ ಸಕ್ರಮಾತಿಗೆ ಪರಿಗಣಿಸಲು ಅರ್ಹರಾಗಿರುವುದಿಲ್ಲವೆಂದು, ಹಾಗೆಯೆ ನೇಮಕಾತಿ ನಿಯಮಗಳಂತೆ ನೇಮಕಾತಿ ಆಗದಿರುವ ವ್ಯಕ್ತಿಗಳಿಗೆ ಸಕ್ರಮಾತಿಯ ಹಕ್ಕು ದೊರೆಯುವುದಿಲ್ಲವೆಂದು ಹಾಗೂ ಇಂತಹ ನಿಯಮಬಾಹಿರ ನೇಮಕಾತಿಯನ್ನು ಸಕ್ರಮಾತಿಗೊಳಿಸಬಾರದೆಂದು ತಿಳಿಸಿರುವ ನಿಲುವನ್ನು ಆಧರಿಸಿ ಸದರಿ ಅರ್ಜಿಯನ್ನು ದಿನಾಂಕ:28.03.2013 ರಂದು ವಜಾಗೊಳಿಸಿದೆ.<br><br>ಮುಂದುವರೆದು, ಮಾನ್ಯ ಸರ್ವೋಚ್ಛ ನ್ಯಾಯಾಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ ನಿಯಮಬಾಹಿರ ನೇಮಕಾತಿಗಳನ್ನು ಸಕ್ರಮಾತಿಗೊಳಿಸಬಾರದೆಂಬ ನಿಲುವನ್ನು ಇತ್ತೀಚೆಗೆ State of Jammu & Kashmir & Others Vs District Bar Association, Bandipora ಪ್ರಕರಣದಲ್ಲಿ ಸಹ ಪುನರುಚ್ಛರಿಸಿರುತ್ತದೆ.<br><br>ಅಲ್ಲದೇ, ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ್ದ ಶ್ರೀ ಜಯಚಂದ್ರ ಮತ್ತು ಇತರರು ಯು.ಜಿ.ಸಿ. ಮಾರ್ಗಸೂಚಿಯಂತೆ ವೇತನ ಮತ್ತು ವೃತ್ತಿ ಪದೋನ್ನತಿ ನೀಡುವಂತೆ ಹಾಗೂ ತಮ್ಮ |

| | | |
|---|---|---|
| | | ಸೇವೆಯನ್ನು ಸಕ್ರಮಾತಿಗೊಳಿಸುವಂತೆ ನಿರ್ದೇಶನ ಕೋರಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ:1579-1585/2017 ನ್ನು ಸಲ್ಲಿಸಿದ್ದು, ಸದರಿ ಅರ್ಜಿಯನ್ನು ಮಾನ್ಯ ನ್ಯಾಯ ಮಂಡಳಿಯು ಸರ್ವೋಚ್ಛ ನ್ಯಾಯಾಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ ನೀಡಿರುವ ತೀರ್ಪನ್ನು ಆಧರಿಸಿ ದಿನಾಂಕ:19.05.2020 ರಂದು ತಿರಸ್ಕರಿಸಿ ತೀರ್ಮ ನೀಡಿರುತ್ತದೆ.<br><br>ಅದರಂತೆ, ಕರ್ನಾಟಕ ಆಡಳಿತ ನ್ಯಾಯಮಂಡಳಿಯು (ಮಾನ್ಯ ಸರ್ವೋಚ್ಛ ನ್ಯಾಯಾಲಯದ ಸಂವಿಧಾನ ಪೀಠವು ಉಮಾದೇವಿ ಪ್ರಕರಣದಲ್ಲಿ ನೀಡಿರುವ ತೀರ್ಪನ್ನು ಆಧರಿಸಿ) ಸೇವಾ ಸಕ್ರಮಾತಿ ಕೋರಿ ಅತಿಥಿ ಉಪನ್ಯಾಸಕರುಗಳು ಸಲ್ಲಿಸಿದ ಅರ್ಜಿಗಳನ್ನು ವಜಾಗೊಳಿಸಿರುವ ಹಿನ್ನೆಲೆಯಲ್ಲಿ ನಿಯಮಾನುಸಾರ ನೇಮಕವಾಗದಿರುವ ಅತಿಥಿ ಉಪನ್ಯಾಸಕರ ನೇಮಕಾತಿಗಳನ್ನು ಸಕ್ರಮಾತಿಗೊಳಿಸಲು ಅವಕಾಶವಿರುವುದಿಲ್ಲ. |
| ಉ) | ಅತಿಥಿ ಉಪನ್ಯಾಸಕರಿಗೆ ಸುಮಾರು 8 ತಿಂಗಳಿಂದ ಗೌರವಧನ ಪಾವತಿ ಆಗದಿರುವುದು ನಿಜವೇ: ಹಾಗಿದ್ದಲ್ಲಿ ಯವ ಕಾಲಮಿತಿಯೊಳಗೆ ಇವರಿಗೆ ಗೌರವಧನ ಪಾವತಿಸಲಾಗುವುದು. | 2019-20ನೇ ಶೈಕ್ಷಣಿಕ ಸಾಲಿನ ಅತಿಥಿ ಉಪನ್ಯಾಸಕರ ಗೌರವಧನಕ್ಕೆ ಸಂಬಂಧಿಸಿಂತೆ, ಜುಲೈ-2019 ರಿಂದ 23.03.2020ರ ವರೆಗೆ ಅಂದರೆ ಲಾಕ್‌ಡೌನ್ ಪ್ರಾರಂಭವಾದ ದಿನಾಂಕ:24.03.2020ರ ನಿಕಟ ಪೂರ್ವ ದಿನಾಂಕದವರೆಗೆ ಸಂಭಾವನೆಯನ್ನು ಪಾವತಿಸಲಾಗಿರುತ್ತದೆ. 2020-21ನೇ ಶೈಕ್ಷಣಿಕ ಸಾಲಿನಲ್ಲಿ ತರಗತಿಗಳು ಇನ್ನೂ ಪ್ರಾರಂಭಗೊಂಡಿರದ ಹಿನ್ನೆಲೆಯಲ್ಲಿ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಂಡಿರುವುದಿಲ್ಲ. ಆದ್ದರಿಂದ ಪ್ರಸ್ತುತ ಶೈಕ್ಷಣಿಕ ಸಾಲಿನಲ್ಲಿ ಯಾವುದೇ ಗೌರವಧನ ಬಾಕಿ ಇರುವುದಿಲ್ಲ. |

ಇಡಿ 158 ಡಿಸಿಇ 2020

(ಡಾ. ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)

Department of Collegiate Education

Guest Faculty Districtwise Count(2019-20)

| Sl No | DistrictName | Experience | | | | | | | | Total |
|---|---|---|---|---|---|---|---|---|---|---|
| | | 0 | 1 to 5 | 6 to 10 | 11 to 15 | 16 to 20 | 21 to 25 | 25 to 30 | 31 & above | |
| 1 | Bagalkote | 104 | 191 | 144 | 32 | | | | | 471 |
| 2 | Bangalore | 225 | 371 | 133 | 27 | 5 | 2 | 1 | 1 | 765 |
| 3 | Bangalore Rural | 46 | 61 | 39 | 5 | 3 | 2 | | | 156 |
| 4 | Belgaum | 85 | 209 | 207 | 56 | 4 | | | | 561 |
| 5 | Bellary | 185 | 306 | 156 | 51 | 3 | 1 | | | 702 |
| 6 | Bidar | 43 | 98 | 80 | 8 | | | | | 229 |
| 7 | Bijapur | 85 | 117 | 109 | 16 | | | | | 327 |
| 8 | Chamarajanagar | 35 | 97 | 57 | 15 | 3 | | | | 207 |
| 9 | Chickmagalur | 75 | 175 | 153 | 35 | 9 | | | | 447 |
| 10 | Chikkaballapur | 79 | 162 | 87 | 15 | | | | | 343 |
| 11 | Chitradurga | 100 | 259 | 207 | 33 | 7 | 1 | | 1 | 608 |
| 12 | Dakshina Kannada | 98 | 285 | 187 | 29 | | 1 | | | 600 |
| 13 | Davanagere | 97 | 212 | 146 | 25 | 7 | | | | 487 |
| 14 | Dharwad | 75 | 117 | 50 | 17 | 1 | | | | 260 |
| 15 | Gadag | 80 | 129 | 92 | 23 | 4 | 1 | | | 329 |
| 16 | Gulbarga | 84 | 189 | 140 | 22 | 3 | | | | 438 |
| 17 | Hassan | 198 | 453 | 220 | 58 | 19 | 4 | 1 | | 953 |
| 18 | Haveri | 84 | 204 | 134 | 27 | 5 | 1 | 1 | | 456 |
| 19 | Kolar | 138 | 151 | 73 | 32 | 4 | | | | 398 |
| 20 | Koppal | 105 | 195 | 120 | 18 | 3 | | | | 441 |
| 21 | Madikeri | 25 | 56 | 36 | 5 | 1 | 1 | | | 124 |
| 22 | Mandya | 122 | 249 | 171 | 34 | 5 | | | | 581 |
| 23 | Mysore | 291 | 454 | 228 | 50 | 11 | 4 | | | 1038 |
| 24 | Raichur | 75 | 184 | 128 | 26 | | | | | 413 |
| 25 | Ramnagar | 68 | 136 | 61 | 16 | 2 | | | | 283 |
| 26 | Shimoga | 98 | 270 | 224 | 28 | 8 | | | | 628 |
| 27 | Tumkur | 173 | 301 | 193 | 44 | 7 | | | | 718 |
| 28 | Udupi | 83 | 217 | 178 | 29 | 3 | | | | 510 |
| 29 | Uttara Kannada | 117 | 303 | 208 | 33 | 1 | 1 | | | 663 |
| 30 | Yadgir | 57 | 105 | 127 | 20 | 2 | | | | 311 |
| | Total | 3130 | 6256 | 4088 | 829 | 120 | 19 | 3 | 2 | 14447 |